## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಜನಸ್ಪಂದನಾ ಕೋಶ) ಪ್ರಧಾನ ಕಾರ್ಯದರ್ಶಿ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 51 ಸಸಿವಿ 2003, ದಿ: 17.6.2003.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 51 ಸಸಿವಿ 2003, ದಿ: 23.12.2003.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 24 ಸಸಿವಿ 2006, ದಿ: 20.3.2006.
4. ಪ್ರಧಾನ ಕಾರ್ಯದರ್ಶಿ, ಸಿ.ಆ.ಸು.ಇಲಖೆ (ಜನಸ್ಪಂದನಾ ಕೋಶ) ಇವರ ಅರೆ ಸರ್ಕಾರ ಪತ್ರ ಸಂಖ್ಯೆ: ಡಿಪಿಎಆರ್/ಪಿಎಸ್/ಜೆಎಸ್/148/2007, ದಿನಾಂಕ: 27.4.2007.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಪ್ರಧಾನ ಕಾರ್ಯದರ್ಶಿ (ಸಾರ್ವಜನಿಕ: ದೂರುಗಳು) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ 2 ವರ್ಷಗಳ ಅವಧಿಗೆ ಸೃಜಿಸಲಾಗಿದೆ.

| | | |
|---|---|---|
| 1. | ಆಪ್ತ ಕಾರ್ಯದರ್ಶಿ ಗ್ರೇಡ್-2 : ಪತ್ರಾಂಕಿತ ಆಪ್ತ ಸಹಾಯಕ | 01 ಹುದ್ದೆ |
| 2. | ಪತ್ರಾಂಕಿತ ಆಪ್ತ ಸಹಾಯಕ : ಹಿರಿಯ ಶೀಘ್ರಲಿಪಿಗಾರ | 01 ಹುದ್ದೆ |
| 3. | ಶಾಖಾಧಿಕಾರಿ : ಹಿರಿಯ ಸಹಾಯಕ | 01 ಹುದ್ದೆ |
| 4. | ವಾಹನಚಾಲಕ | 01 ಹುದ್ದೆ |
| 5. | ದಲಾಯತ್ | 02 ಹುದ್ದೆಗಳು |

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಎರಡು ಶೀಘ್ರಲಿಪಿಗಾರರ ಹುದ್ದೆ ಹಾಗೂ ಒಂದು ಕಿರಿಯ ಸಹಾಯಕರ ಹುದ್ದೆಯನ್ನು ಸೃಜಿಸಲಾಗಿದೆ.

ಮೇಲೆ ಓದಲಾಗಿರುವ (3)ರಲ್ಲಿ ಓದಲಾಗಿರುವ ದಿನಾಂಕ: 20.3.2006ರ ಸರ್ಕಾರಿ ಆದೇಶದಲ್ಲಿ ಈ ಎಲ್ಲಾ ಹುದ್ದೆಗಳನ್ನು ದಿನಾಂಕ: 26.5.2006 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಿದ್ದು, ಈ ವಿಸ್ತರಿತ ಅವಧಿಯು ದಿನಾಂಕ: 25.5.2007ಕ್ಕೆ ಪೂರ್ಣಗೊಳ್ಳಲಿದೆ. ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಜನಸ್ಪಂದನಾ ಕೋಶ) ಇವರು ಕ್ರಮ ಸಂಖ್ಯೆ (4) ರಲ್ಲಿ ಓದಲಾದ ದಿನಾಂಕ: 27.4.2007ರ ಅರೆ ಸರ್ಕಾರಿ ಪತ್ರದಲ್ಲಿ ಈ ಎಲ್ಲಾ ಹುದ್ದೆಗಳನ್ನು ದಿನಾಂಕ: 26.5.2007 ರಿಂದ ಜಾರಿಗೆ ಬರುವಂತೆ ಮತ್ತೆ 2 ವರ್ಷಗಳ ಅವಧಿಗೆ ಮುಂದುವರೆಸಲು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 30 ಸಸಿವಿ 2007, ಬೆಂಗಳೂರು, ದಿನಾಂಕ: 21ನೇ ಮೇ 2007**

ಕರ್ನಾಟಕ ಸರ್ಕಾರ ಸಚಿವಾಲಯದ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಪ್ರಧಾನ ಕಾರ್ಯದರ್ಶಿ (ಜನಸ್ಪಂದನಾ ಕೋಶ) ಹಾಗೂ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 26.5.2007 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

| | | |
|---|---|---|
| 1. | ಆಪ್ತ ಕಾರ್ಯದರ್ಶಿ ಗ್ರೇಡ್-2 : ಪತ್ರಾಂಕಿತ ಆಪ್ತ ಸಹಾಯಕ | 01 ಹುದ್ದೆ |
| 2. | ಪತ್ರಾಂಕಿತ ಆಪ್ತ ಸಹಾಯಕ : ಹಿರಿಯ ಶೀಘ್ರಲಿಪಿಗಾರ | 01 ಹುದ್ದೆ |
| 3. | ಶಾಖಾಧಿಕಾರಿ : ಹಿರಿಯ ಸಹಾಯಕ | 01 ಹುದ್ದೆ |
| 4. | ಶೀಘ್ರಲಿಪಿಗಾರ | 01 ಹುದ್ದೆ |
| 5. | ಕಿರಿಯ ಸಹಾಯಕ | 01 ಹುದ್ದೆ |
| 6. | ದಲಾಯತ್ | 02 ಹುದೆಗಳು |
| 7. | ವಾಹ ಚಾಲಕ | 01 ಹುದ್ದೆ |

ದಿನಾಂಕ: 10.7.96ರ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ರಲ್ಲಿನ ಅಧಿಕಾರ ಪ್ರತ್ಯಾಯೋಜನೆಯಂತೆ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಈ ಆದೇಸವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 941

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**ವಿಷಯ:** ದಿವಂಗತ ಎಫ್.ಎಫ್. ವರೂರ್, ನಿವೃತ್ತ ಕೆಎಎಸ್ ಅಧಿಕಾರಿ ರವರಿಗೆ ವಿಧಿಸಲಾಗಿರುವ ದಂಡನೆಯ ಆದೇಶವನ್ನು ಹಿಂದಕ್ಕೆ ಪಡೆಯುವ ಕುರಿತಂತೆ.

**ಓದಲಾಗಿದೆ:**
1. ದಿ:ಎಫ್.ಎಫ್.ವರೂರ್ ಅವರ ವಿರುದ್ಧ ಚಿಕ್ಕೋಡಿಯ ನ್ಯಾಯಾಲಯದಲ್ಲಿ ದಾಖಲಾದ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ: 333/94 ದಿನಾಂಕ:28.02.2001.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 41 ಎಸ್‌ಇಎನ್ 87, ದಿನಾಂಕ: 05.10.2001.
3. ದಿ:ಎಫ್.ಎಫ್. ವರೂರ್, ನಿವೃತ್ತ ಕೆಎಎಸ್ ಅಧಿಕಾರಿ ಅವರು ಬೆಳಗಾಂನ ಫಾಸ್ಟ್ ಟ್ರ್ಯಾಕ್ ಕೋರ್ಟ್-3 ಮತ್ತು ಅಡಿಷನಲ್ ಸೆಷನ್ಸ್ ನ್ಯಾಯಾಲಯದಲ್ಲಿ ಸಲ್ಲಿಸಿರುವ ಕ್ರಿಮಿನಲ್ ಅಪೀಲು ಸಂಖ್ಯೆ:22/2001 ದಿನಾಂಕ:19.11.2004.

**ಪ್ರಸ್ತಾವನೆ:**

ದಿ: ಎಫ್.ಎಫ್. ವರೂರ್, ನಿವೃತ್ತ ಕೆಎಎಸ್ ಅಧಿಕಾರಿ ಅವರು ವಿಶೇಷ ಭೂಸ್ವಾಧೀನಾಧಿಕಾರಿ, ಹಿಡಕಲ್‌ನಲ್ಲಿ ಕಾರ್ಯ ನಿರ್ವಹಿಸುತ್ತಿದಾಗ, ಚಿಕ್ಕೋಡಿ ಸಿವಿಲ್ ನ್ಯಾಯಾಲಯದಿಂದ ದಿ:22.07.82ರಲ್ಲಿ ಸ್ವೀಕರಿಸಲ್ಪಟ್ಟ ಭೂಸ್ವಾಧೀನಕ್ಕೆ ಸಂಬಂಧಿಸಿದ 34 ಪ್ರಕರಣಗಳಲ್ಲಿ

ಭೂಸ್ವಾಧೀನ ಕಾಯ್ದೆ 1894ರ ಕಲಂ 8(1)ರನ್ವಯ ಮುಂದಿನ ಕ್ರಮ ಕೈಗೊಳ್ಳಲು ವಿಫಲರಾಗಿರುವುದರ ಸಂಬಂಧ ವಿಚಾರಣೆ ನಡೆಸಿ ಅವರ ಮಾಸಿಕ ವಿಶ್ರಾಂತಿ ವೇತನದಿಂದ ಪ್ರತಿ ತಿಂಗಳು ರೂ.100/-ಗಳನ್ನು 5 ವರ್ಷಗಳ ಕಾಲ ಕಡಿತಗೊಳಿಸುವ ದಂಡನೆಯನ್ನು ವಿಧಿಸಿ ದಿ:12.12.85 ರಂದು ಆದೇಶ ಹೊರಡಿಸಲಾಯಿತು. ಸದರಿ ಅಧಿಕಾರಿಯವರು ಮೇಲ್ಕಂಡ ಹುದ್ದೆಯನ್ನು ತ್ಯಜಿಸಿದ ನಂತರವೂ ಸ್ಥಳೀಯ ವಕೀಲರು ಹಾಗೂ ಕಛೇರಿಯ ಇತರೆ ಸಿಬ್ಬಂದಿಯೊಂದಿಗೆ ಷಾಮೀಲಾಗಿ ಭೂಸ್ವಾಧೀನ ಪ್ರಕರಣಗಳ ಕುರಿತು ಹೆಚ್ಚಿನ ಪರಿಹಾರ ಧನಕ್ಕಾಗಿ ಅರ್ಜಿ ಸಲ್ಲಿಸಿದಂತೆ ಕೃತಕ ದಾಖಲೆಗಳನ್ನು ಸೃಷ್ಟಿಸಿ ಅವುಗಳು ಅಧಿಕೃತವಾಗಿ ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿಯಿಂದ ರವಾನಿಸಲ್ಪಡದಿದ್ದಾಗ್ಯೂ ಸದರಿ ಕಛೇರಿಯಿಂದ ರವಾನಿಸಲ್ಪಟ್ಟಂತೆ ಸೃಷ್ಟಿಸಿ ಅವುಗಳನ್ನು ತಮ್ಮ ಸಹಿಯೊಡನೆ ಚಿಕ್ಕೋಡಿ ನ್ಯಾಯಾಲಯಕ್ಕೆ ಕಳುಹಿಸುವ ಮೂಲಕ ಸರ್ಕಾರಕ್ಕೆ ವಂಚನೆ ಎಸಗಿದ ಕ್ರಿಮಿನಲ್ ದುರ್ನಡತೆಗಾಗಿ ಅವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಹೂಡಲು ದಿ:19.08.97ರ ಸರ್ಕಾರಿ ಆದೇಶದಲ್ಲಿ ಸಿ.ಓ.ಡಿ.ಗೆ ಅನುಮತಿ ನೀಡಲಾಯಿತು. ಅದರಂತೆ ಚಿಕ್ಕೋಡಿಯ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ದಾಖಲಾದ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ:333/94ರಲ್ಲಿ ಪ್ರಕರಣ ನಡೆದು ಅಂತಿಮವಾಗಿ ಸದರಿ ನ್ಯಾಯಾಲಯವು ಮೇಲೆ (1)ರಲ್ಲಿ ಓದಲಾದ ದಿ:28.02.01 ರಂದು ಆದೇಶ ಹೊರಡಿಸಿ ಅವರ ವಿರುದ್ಧ ಭಾರತೀಯ ದಂಡ ಸಂಹಿತೆಯ ವಿವಿಧ ಕಲಂಗಳಡಿಯಲ್ಲಿ 4 ವರ್ಷ 6 ತಿಂಗಳ ಕಠಿಣ ಶಿಕ್ಷೆಯನ್ನು ಮತ್ತು 2,500/-ರೂ.ಗಳ ಜುಲ್ಮಾನೆಯನ್ನು ವಿಧಿಸಿತು. ಅದರನ್ವಯ ಅವರ ನಿವೃತ್ತಿ ಸೌಲಭ್ಯಗಳನ್ನು ಅಂದರೆ ಮಾಸಿಕ ವಿಶ್ರಾಂತಿ ವೇತನ, ಡಿ.ಸಿ.ಆರ್.ಜಿ ಮತ್ತು ರಜೆ ನಗದೀಕರಣ ಇತ್ಯಾದಿ ಸೌಲಭ್ಯಗಳನ್ನು ಮೇಲೆ (2)ರಲ್ಲಿ ಓದಲಾದ ದಿ:05.10.01ರ ಆದೇಶದಲ್ಲಿ ಮುಟ್ಟುಗೋಲು ಹಾಕಿಕೊಳ್ಳಲಾಯಿತು.

ಸದರಿ ಅಧಿಕಾರಿಯವರು ಚಿಕ್ಕೋಡಿಯ ಜೆ.ಎಂ.ಎಫ್.ಸಿ. ನ್ಯಾಯಾಲಯದ ತೀರ್ಪಿನ ವಿರುದ್ಧ ಬೆಳಗಾಂನ ಫಾಸ್ಟ್ ಟ್ರ್ಯಾಕ್ ಕೋರ್ಟ್-3 ಮತ್ತು ಅಡಿಷನಲ್ ಸೆಷನ್ಸ್ ನ್ಯಾಯಾಲಯದಲ್ಲಿ ಕ್ರಿಮಿನಲ್ ಅಪೀಲು ಸಂ.22/2001ನ್ನು ಸಲ್ಲಿಸಿರುತ್ತಾರೆ. ವಿಚಾರಣೆಯನ್ನು ನಡೆಸಿದ ನ್ಯಾಯಾಲಯವು ಮೇಲೆ (3)ರಲ್ಲಿ ಓದಲಾದ ದಿ:19.11.04 ರಂದು ತೀರ್ಪು ನೀಡಿ ಸದರಿ ನಿವೃತ್ತ ಅಧಿಕಾರಿಯವರಿಗೆ ನೀಡಿದ ಶಿಕ್ಷೆಯನ್ನು ರದ್ದುಗೊಳಿಸಿ ಅವರನ್ನು ಆರೋಪಮುಕ್ತಗೊಳಿಸಿ ತೀರ್ಪು ನೀಡಿರುತ್ತದೆ. ಬೆಳಗಾಂನ ಫಾಸ್ಟ್ ಟ್ರ್ಯಾಕ್ ಕೋರ್ಟ್-3 ಮತ್ತು ಅಡಿಷನಲ್ ಸೆಷನ್ಸ್ ನ್ಯಾಯಾಲಯದ ಆದೇಶವು ಮೇಲ್ಮನವಿ ಸಲ್ಲಿಸಲು ಯೋಗ್ಯವಲ್ಲವೆಂದು ಜಂಟಿ ಅಭಿಯೋಗ ನಿರ್ದೇಶಕರು, ಬೆಂಗಳೂರು ತಿಳಿಸಿರುತ್ತಾರೆ. ಅದರಂತೆ ಸರ್ಕಾರವು ದಿ:05.10.01ರ ಆದೇಶವನ್ನು ಹಿಂತೆಗೆದುಕೊಳ್ಳಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 327 ಎಸ್‌ಇಎನ್ 2006, ಬೆಂಗಳೂರು, ದಿನಾಂಕ: 17ನೇ ಮೇ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 41 ಎಸ್‌ಇಎನ್ 87 ದಿನಾಂಕ:05.10.2001ರ ಆದೇಶವನ್ನು ಈ ಮೂಲಕ ಹಿಂತೆಗೆದುಕೊಳ್ಳುತ್ತದೆ.

ತತ್ಸಂಬಂಧವಾಗಿ ತಡೆಹಿಡಿಯಲಾದ/ಹಿಂತೆಗೆದುಕೊಳ್ಳಲಾದ ನಿವೃತ್ತಿ ಸೌಲಭ್ಯಗಳನ್ನು ಶ್ರೀಯುತರು ನಿಧನ ಹೊಂದಿರುವ ಕಾರಣಗಳಿಂದಾಗಿ ಅವರ ಕುಟುಂಬವು ಪಡೆಯಲು ಅರ್ಹವಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 943

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಮೈಸೂರು ಜಿಲ್ಲೆ, ಟಿ. ನರಸೀಪುರ (ಬನ್ನೂರು ವಿಧಾನಸಭಾ ಕ್ಷೇತ್ರ) ಮತ್ತು ಹೆಚ್.ಡಿ. ಕೋಟಿ. ತಾಲ್ಲೂಕಿನ ಗ್ರಾಮೀಣ ರಸೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರಗಳ ಸಂಖ್ಯೆ:ಮುಇ:ಸಂಕದ:ರಶಾ: ಮೇಲ್ದರ್ಜೆ:ಸಇಂ:1:2006-07, ದಿನಾಂಕ:17.04.2007 ಮತ್ತು 17.4.2007.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಮೈಸೂರು ಜಿಲ್ಲೆ, ಟಿ. ನರಸೀಪುರ (ಬನ್ನೂರು ವಿಧಾನಸಭಾ ಕ್ಷೇತ್ರ) ಮತ್ತು ಹೆಚ್.ಡಿ. ಕೋಟೆ, ತಾಲ್ಲೂಕಿನ ಗ್ರಾಮೀಣ ರಸ್ತೆಗಳನ್ು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಗಳನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಗಳು ದುಸ್ಥಿತಿಯಲ್ಲಿದ್ದು, ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ.ಮೀ.) |
|---|---|---|
| | **ಬನ್ನೂರು ವಿಧಾನಸಭಾ ಕ್ಷೇತ್ರ:** | |
| 1. | ಗಾಡಿಜೋಗಿಹುಂಡಿ ಬಿ. ಸೀಹಳ್ಳಿ ಹುಣಸಗಳ್ಳಿ, ಗೊರವಿಹಳ್ಳಿ ಮಾರ್ಗವಾಗಿ ತುರಗನೂರು ಸೇರುವ ರಸ್ತೆ | 11.00 |
| 2. | ಶ್ರೀರಂಗಪಟ್ಟಣ ಸೋಸಲೆ ಶಿವನಸಮುದ್ರ ರಸ್ತೆಯಿಂದ ರಾಮೇಗೌಡನಪುರಕ್ಕೆ ಹೋಗುವ ರಸ್ತೆ | 14.50 |
| 3. | ಬಿ.ಎಂ.ರಸ್ತೆಯಿಂದ ಕಟ್ಟೆಕೊಪ್ಪಲು ಹೆಗ್ಗೂರು, ಕೆಂಪೇಗೌಡನಕೊಪ್ಪಲು ಮೇಣಸೀಕ್ಯಾತನಹಳ್ಳಿ ಮಾರ್ಗವಾಗಿ ದೊಡ್ಡಮುಲಗೂಡು ರಸ್ತೆ ಸೇರುವ ರಸ್ತೆ. | 12.00 |
| 4. | ಕೆಂಪೇಗೌಡನ ಕೊಪ್ಪಲುನಿಂದ ಬಿ.ಎಂ.ರಸ್ತೆ ದೇಶುವಳ್ಳಿ ಮಾರ್ಗ | 7.00 |
| | **ಒಟ್ಟು** | **44.50** |
| | **ಹೆಚ್.ಡಿ. ಕೋಟೆ ತಾಲ್ಲೂಕು:** | |
| 1. | ಕೊರಟಗೆರೆ ಬಾವಲಿ ರಸ್ತೆಯಿಂದ ಮೈಸೂರು ಬೋಗಾದಿ ಗದ್ದಿಗೆ ರಸ್ತೆ ಸೇರುವ ರಸ್ತೆ ಕರಿಗಳ ಬಾಚೀಗೌಡಹಳ್ಳಿ, ಜೋಂಪನಹಳ್ಳಿ ಮಾರ್ಗ. | 11.00 |
| 2. | ಬಿದರಹಳ್ಳಿ ಬಸಾಪುರ, ಕಂಚನಹಳ್ಳಿ, ಎಸ್.ಬೇಗೂರು ಮತ್ತು ಗಂಡತ್ತೂರು ಮಾರ್ಗ | 21.00 |

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ.ಮೀ.) |
|---|---|---|
| 3. | ಹಂಪಾಪುರದಿಂದ ಜಿನ್ನಹಳ್ಳಿ ಮಲ್ಲರದಹುಂಡಿ ಮತ್ತು ಕಂಚುಮಳ್ಳಿ ಮಾರ್ಗ ಹತ್ಯಾಳ್ ರಸ್ತೆ. | 10.00 |
| 4. | ಸಾಗರೆಯಿಂದ ಚನ್ನಾಪುರ ಹೆಗ್ಗನೂರು ನಂದಿನಾಥಪುರ ಎನ್. ಬೇಗೂರು ಮುಖ್ಯ ರಸ್ತೆ. | 7.50 |
| 5. | ಸರಗೂರಿನಿಂದ ಬಿದರಹಳ್ಳಿಸರ್ಕಲ್‌ಗೆ ಸಾಗರೆ ಮಾರ್ಗ | 6.80 |
| 6. | ಚಿಕ್ಕೆರೆಯೂರು ರಸ್ತೆಯಿಂದ ಸವ್ವೆ ಗೂಳಿಕಟ್ಟೆ ಗಂಡಗೌಡನ ಕಾಲೋನಿ ಮತ್ತು ಇಂದಿರಾನಗರ ಮಾರ್ಗ ಪಡುಕೋಟೆ ರಸ್ತೆ. | 6.40 |
| 7. | ಅಂತರ ರಸ್ತೆಯಿಂದ ರಾಮೇನಹಟ್ಟಿ ಕಬಿನಿ ಮುಖ್ಯ ರಸ್ತೆ | 7.00 |
| 8. | ಹೆಚ್.ಡಿ. ಕೋಟೆ ಮೂರ್ಕಲ್ ರಸ್ತೆಯಿಂದ ಬೂದನೂರು ನಂಜನಾಯ್ಕನಹಳ್ಳಿ ರಸ್ತೆ. | 6.40 |
| 9. | ಮಾದಪುರ ಬೋವಿ ಕಾಲೋನಿ ದೇವರಾಜ ಕಾಲೋನಿ, ಚಿಕ್ಕೆರೆಯೂರು | 4.50 |
| 10. | ರಾಮನಾಥಪುರ ತೆರಕಣಾಂಬಿ ರಸ್ತೆ ಕೆ.ಎಡತೊರೆಯಿಂದ ಹಿಟ್ಟಕಾಲೋನಿ ರಸ್ತೆ. | 4.50 |
| 11. | ತಾರಕ ಮುಖ್ಯ ರಸ್ತೆಯಿಂದ ಕಟ್ಟೆ ಮುನುಗುನಹಳ್ಳಿ ಅಲ್‌ತಾಳ್ ಹುಂಡಿ ಮತ್ತು ಕೊರಟಗೆರೆ ಬಾವಲಿ ರಸ್ತೆ. | 6.40 |
| 12. | ಹೆಚ್.ಡಿ. ಕೋಟೆ ಮೂರ್ಕಲ್ ರಸ್ತೆಯಿಂದ ಕಲ್ಲಹಟ್ಟಿ ಜಿ.ಎಂ.ಹಳ್ಳಿ ಸಿದ್ದಾಪುರ ರಸ್ತೆ. | 5.00 |
| 13. | ಹೆಚ್.ಡಿ. ಕೋಟೆ ಯಿಂದ ಹಾರೋಪುರ ತೊರವಳ್ಳಿ ಮತ್ತು ಬೆಳಗನಹಳ್ಳಿ ಮಾರ್ಗ. | 5.00 |
| 14. | ಎಂ.ಬಿ.ಜಿ ರಸ್ತೆಯಿದ ಹಳ್ಳದ ಮನುಗನಹಳ್ಳಿ. | 4.00 |
| 15. | ಎಂ.ಬಿ.ಜಿ. ರಸ್ತೆಯಿಂದ ಬೆಟ್ಟದಬೀಡು ಮಾರ್ಗ ಕಣಿಯನಹುಂಡಿಗೆ ಹೋಗುವ ರಸ್ತೆ. | 6.70 |
| 16. | ಚಿಜಕ್ಕನಹಳ್ಳಿಯಿಂದ ಗಂಡತ್ತೂರಿಗೆ ಹೋಗುವ ರಸ್ತೆ. | 7.00 |
| 17. | ಮಳ್ಳೂರಿನಿಂದ ಲಂಕೆಗೆ ಹೋಗವ ರಸ್ತೆ | 15.00 |
| 18. | ಚಿಕ್ಕೂರಿನಿಂದ ಮುದ್ದನಹುಂಡಿ ಮಾರ್ಗ ಅಡಹಳ್ಳಿಗೆ ಹೋಗುವ ರಸ್ತೆ. | 5.40 |
| 19. | ಅಂತರಸಂತೆಯಿಂದ ಹುಣಸೇಕುಪ್ಪೆಗೆ ಹೋಗುವ ರಸ್ತೆ. | 5.20 |
| 20. | ಹೆಗ್ಗನೂರಿನಿಂದ ಹಿರೇಹಳ್ಳಿ ಸರ್ಕಲ್‌ಗೆ ಹೋಗುವ ರಸ್ತೆ | 8.80 |
| 21. | ಹೆಚ್.ಡಿ. ಕೋಟೆಯಿಂದ ನಾಗನಹಳ್ಳಿ, ಹತ್ವಾಳ್ ಹುಂಡಿ ರಸ್ತೆ. | 6.40 |
| 22. | ಬಿ.ಎಂ. ರಸ್ತೆಯಿಂದ ಹೊಸಮಾಳ ರಸ್ತೆ ಕೆಂಪೇಗೌಡನಹುಂಡಿ ಮಾರ್ಗ. | 5.90 |
| 23. | ಬಿ.ಎಂ. ರಸ್ತೆಯಿಂದ ಆನೆಮಾಳ ಸೇರುವ ರಸ್ತೆ. | 7.00 |
| 24. | ತಾರಕ ಮುಖ್ಯ ರಸ್ತೆಯಿಂದ ಹಿರೇಹಳ್ಳಿ ಎ. ಮತ್ತು ದಟ್ಟಹಳ್ಳಿ ಮೂರ್ಕಲ್ ಮಾರ್ಗ | 6.70 |
| 25. | ಮುಖ್ಯ ರಸ್ತೆಯಿಂದ ಪೇಂಜಹಳ್ಳಿ ಗಿರಿಜನ ಕಾಲೋನಿಗೆ ಸೇರುವ ರಸ್ತೆ. | 5.80 |
| 26. | ಕಬಿನಿ ಹೊಳೆಯಿಂದ ಪುರದಕಟ್ಟೆಗೆ ಹೋಗುವ ರಸ್ತೆ ಚಿಕ್ಕದೇವಮ್ಮನ ಬೆಗ್ಗ ಮಾರ್ಗ ರಸ್ತೆ. | 7.70 |
| 27. | ರಾಮನಾಥಪುರ ತೆರಕಣಾಂಬಿ ರಸ್ತೆಯಿಂದ ಮನುಗನಹಳ್ಳಿ ಸೇರುವ ರಸ್ತೆ ಪುರದ ಕಟ್ಟೆ ಹೂವಿನಕೊಳ ಮಾರ್ಗ. | 9.00 |
| 28. | ಶಾಂತಿನಿವಾಸ ರಸ್ತೆಯಿಂದ ಬಿ.ಮಠಕೆರೆ ಗಿರಿಜನ ಕಲೋನಿ ರಸ್ತೆ ವಲ್ಲಹಳ್ಳಿ ಮಾರ್ಗ. | 5.00 |
| 29. | ಸರಗೂರು ಮೊಳೆಯೂರು ರಸ್ತೆಯಿಂದ ನರಸೀಪುರಕ್ಕೆ ಸೇರವ ರಸ್ತೆ. | 8.20 |
| 30. | ಮುತ್ತಿಗೆ ಚಿಕ್ಕತಳಲು ಸರ್ಕಲ್ ಚಿಕ್ಕಬರಗಿಗೆ ಸೇರವ ರಸ್ತೆ. | 7.00 |
| 31. | ಚಿಕ್ಕೂರು ಕಾಳಿಹುಂಡಿ ಇಬ್ಬಾಲ ಶಂಕಹಳ್ಳಿ ರಸ್ತೆ. | 10.40 |
| 32. | ತುಂಬುಸೆಸೋಗೆಯಿಂದ ಕಬಿನಿ ಕಾಲೋನಿಗೆ ಸೇರುವ ರಸ್ತೆ. | 5.40 |
| 33. | ಬೂದನೂರು ಬೊಮ್ಮಲಪುರ ರಸ್ತೆ ಬಿ.ಎಂ. ಹಳ್ಳಿ ಮಾರ್ಗ. | 10.00 |
| 34. | ದೇವರಾಜಕಾಲೋನಿ ಚಿಕ್ಕ ಕೆರೆಯೂರು ರಸ್ತೆ. | 5.00 |
| | **ಒಟ್ಟು** | **253.10** |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 2007 ಸಿಆರ್‌ಎಂ 2007, ಬೆಂಗಳೂರು, ದಿನಾಂಕ: 15ನೇ ಮೇ 2007**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಗಳನ್ನು ಪರಿಶೀಲಿಸಿ, ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ನಿಯಮಾನುಸಾರ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ.ಮೀ.) |
|---|---|---|
| | **ಬನ್ನೂರು ವಿಧಾನಸಭಾ ಕ್ಷೇತ್ರ:** | |
| 1. | ಗಾಡಿಜೋಗಿಹುಂಡಿ ಬಿ. ಸೀಹಳ್ಳಿ ಹುಣಸಗಳ್ಳಿ, ಗೊರವಿನಹಳ್ಳಿ ಮಾರ್ಗವಾಗಿ ತುರಗನೂರು ಸೇರುವ ರಸ್ತೆ | 11.00 |
| 2. | ಶ್ರೀರಂಗಪಟ್ಟಣ ಸೋಸಲೆ ಶಿವನಸಮುದ್ರ ರಸ್ತೆಯಿಂದ ರಾಮೇಗೌಡನಪುರಕ್ಕೆ ಹೋಗುವ ರಸ್ತೆ | 14.50 |
| 3. | ಬಿ.ಎಂ.ರಸ್ತೆಯಿಂದ ಕಟ್ಟೆಕೊಪ್ಪಲು ಹೆಗ್ಗೂರು, ಕೆಂಪೇಗೌಡನಕೊಪ್ಪಲು ಮೆಣಸೀಕ್ಯಾತನಹಳ್ಳಿ ಮಾರ್ಗವಾಗಿ ದೊಡ್ಡಮುಲಗೂಡು ರಸ್ತೆ ಸೇರುವ ರಸ್ತೆ. | 12.00 |
| 4. | ಕೆಂಪೇಗೌಡನ ಕೊಪ್ಪಲುನಿಂದ ಬಿ.ಎಂ.ರಸ್ತೆ ದೇಶುವಳ್ಳಿ ಮಾರ್ಗ | 7.00 |
| | **ಒಟ್ಟು** | **44.50** |

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ.ಮೀ.) |
|---|---|---|
| | **ಹೆಚ್.ಡಿ. ಕೋಟೆ ತಾಲ್ಲೂಕು:** | |
| 1. | ಕೊರಟಗೆರೆ ಬಾವಲಿ ರಸ್ತೆಯಿಂದ ಮೈಸೂರು ಬೋಗಾದಿ ಗದ್ದಿಗೆ ರಸ್ತೆ ಸೇರುವ ರಸ್ತೆ ಕರಿಗಳ ಬಾಚೇಗೌಡಹಳ್ಳಿ, ಜೋಂಪನಹಳ್ಳಿ ಮಾರ್ಗ. | 11.00 |
| 2. | ಬಿದರಹಳ್ಳಿ ಬಸಾಪುರ, ಕಂಚನಹಳ್ಳಿ, ಎಸ್.ಬೇಗೂರು ಮತ್ತು ಗಂಡತ್ತೂರು ಮಾರ್ಗ | 21.00 |
| 3. | ಹಂಪಾಪುರದಿಂದ ಜಿನ್ನಹಳ್ಳಿ ಮಲ್ಲರದಹುಂಡಿ ಮತ್ತು ಕಂಚುಮಳ್ಳಿ ಮಾರ್ಗ ಹತ್ವಾಳ್ ರಸ್ತೆ. | 10.00 |
| 4. | ಸಾಗರೆಯಿಂದ ಚನ್ನಾಪುರ ಹೆಗ್ಗನೂರು ನಂದಿನಾಥಪುರ ಎನ್. ಬೇಗೂರು ಮುಖ್ಯ ರಸ್ತೆ. | 7.50 |
| 5. | ಸರಗೂರಿನಿಂದ ಬಿದರಹಳ್ಳಿಸರ್ಕಲ್‌ಗೆ ಸಾಗರೆ ಮಾರ್ಗ | 6.80 |
| 6. | ಚಿಕ್ಕೆರೆಯೂರು ರಸ್ತೆಯಿಂದ ಸವ್ವೆ ಗೂಳಿಕಟ್ಟೆ ಗಂಡಗೌಡನ ಕಾಲೋನಿ ಮತ್ತು ಇಂದಿರಾನಗರ ಮಾರ್ಗ ಪಡುಕೋಟೆ ರಸ್ತೆ. | 6.40 |
| 7. | ಅಂತರ ರಸ್ತೆಯಿಂದ ರಾಮೇನಹಟ್ಟಿ ಕಬಿನಿ ಮುಖ್ಯ ರಸ್ತೆ | 7.00 |
| 8. | ಹೆಚ್.ಡಿ. ಕೋಟೆ ಮೂರ್ಕಲ್ ರಸ್ತೆಯಿಂದ ಬೂದನೂರು ನಂಜನಾಯ್ಕನಹಳ್ಳಿ ರಸ್ತೆ. | 6.40 |
| 9. | ಮಾದಪುರ ಬೋವಿ ಕಾಲೋನಿ ದೇವರಾಜ ಕಾಲೋನಿ, ಚಿಕ್ಕೆರೆಯೂರು | 4.50 |
| 10. | ರಾಮನಾಥಪುರ ತೆರಕಣಾಂಬಿ ರಸ್ತೆ ಕೆ.ಎಡತೊರೆಯಿಂದ ಹಿಟ್ಟಕಾಲೋನಿ ರಸ್ತೆ. | 4.50 |
| 11. | ತಾರಕ ಮುಖ್ಯ ರಸ್ತೆಯಿಂದ ಕಟ್ಟೆ ಮುಗುನಹಳ್ಳಿ ಅಲ್‌ತಾಳ್ ಹುಂಡಿ ಮತ್ತು ಕೊರಟಗೆರೆ ಬಾವಲಿ ರಸ್ತೆ. | 6.40 |
| 12. | ಹೆಚ್.ಡಿ. ಕೋಟೆ ಮೂರ್ಕಲ್ ರಸ್ತೆಯಿಂದ ಕಲ್ಲಹಟ್ಟಿ ಜಿ.ಎಂ.ಹಳ್ಳಿ ಸಿದ್ದಾಪುರ ರಸ್ತೆ. | 5.00 |
| 13. | ಹೆಚ್.ಡಿ. ಕೋಟೆ ಯಿಂದ ಹಾರೋಪುರ ತೊರವಳ್ಳಿ ಮತ್ತು ಬೆಳಗನಹಳ್ಳಿ ಮಾರ್ಗ. | 5.00 |
| 14. | ಎಂ.ಬಿ.ಜಿ ರಸ್ತೆಯಿದ ಹಳ್ಳದ ಮನುಗನಹಳ್ಳಿ. | 4.00 |
| 15. | ಎಂ.ಬಿ.ಜಿ. ರಸ್ತೆಯಿಂದ ಬೆಟ್ಟದಬೀಡು ಮಾರ್ಗ ಕಣಿಯನಹುಂಡಿಗೆ ಹೋಗುವ ರಸ್ತೆ. | 6.70 |
| 16. | ಚಿಜಕ್ಕನಹಳ್ಳಿಯಿಂದ ಗಂಡತ್ತೂರಿಗೆ ಹೋಗುವ ರಸ್ತೆ. | 7.00 |
| 17. | ಮಳ್ಳೂರಿನಿಂದ ಲಂಕೆಗೆ ಹೋಗವ ರಸ್ತೆ | 15.00 |
| 18. | ಚಿಕ್ಕೂರಿನಿಂದ ಮುದ್ದನಹುಂಡಿ ಮಾರ್ಗ ಅಡಹಳ್ಳಿಗೆ ಹೋಗುವ ರಸ್ತೆ. | 5.40 |
| 19. | ಅಂತರಸಂತೆಯಿಂದ ಹುಣಸೇಕುಪ್ಪೆಗೆ ಹೋಗುವ ರಸ್ತೆ. | 5.20 |
| 20. | ಹೆಗ್ಗನೂರಿನಿಂದ ಹಿರೇಹಳ್ಳಿ ಸರ್ಕಲ್‌ಗೆ ಹೋಗುವ ರಸ್ತೆ | 8.80 |
| 21. | ಹೆಚ್.ಡಿ. ಕೋಟೆಯಿಂದ ನಾಗನಹಳ್ಳಿ, ಹತ್ವಾಳ್ ಹುಂಡಿ ರಸ್ತೆ. | 6.40 |
| 22. | ಬಿ.ಎಂ. ರಸ್ತೆಯಿಂದ ಹೊಸಮಾಳ ರಸ್ತೆ ಕೆಂಪೇಗೌಡನಹುಂಡಿ ಮಾರ್ಗ. | 5.90 |
| 23. | ಬಿ.ಎಂ. ರಸ್ತೆಯಿಂದ ಆನೆಮಾಳ ಸೇರುವ ರಸ್ತೆ. | 7.00 |
| 24. | ತಾರಕ ಮುಖ್ಯ ರಸ್ತೆಯಿಂದ ಹಿರೇಹಳ್ಳಿ ಎ. ಮತ್ತು ದಟ್ಟಹಳ್ಳಿ ಮೂರ್ಕಲ್ ಮಾರ್ಗ | 6.70 |
| 25. | ಮುಖ್ಯ ರಸ್ತೆಯಿಂದ ಪೇಂಜಹಳ್ಳಿ ಗಿರಿಜನ ಕಾಲೋನಿಗೆ ಸೇರುವ ರಸ್ತೆ. | 5.80 |
| 26. | ಕಬಿನಿ ಹೊಳೆಯಿಂದ ಪುರದಕಟ್ಟೆಗೆ ಹೋಗುವ ರಸ್ತೆ ಚಿಕ್ಕದೇವಮ್ಮನ ಬೆಗ್ಗ ಮಾರ್ಗ ರಸ್ತೆ. | 7.70 |
| 27. | ರಾಮನಾಥಪುರ ತೆರಕಣಾಂಬಿ ರಸ್ತೆಯಿಂದ ಮನುಗನಹಳ್ಳಿ ಸೇರುವ ರಸ್ತೆ ಪುರದ ಕಟ್ಟೆ ಹೂವಿನಕೊಳ ಮಾರ್ಗ. | 9.00 |
| 28. | ಶಾಂತಿನಿವಾಸ ರಸ್ತೆಯಿಂದ ಬಿ.ಮಠಕೆರೆ ಗಿರಿಜನ ಕಲೋನಿ ರಸ್ತೆ ವಲ್ಲಹಳ್ಳಿ ಮಾರ್ಗ. | 5.00 |
| 29. | ಸರಗೂರು ಮೊಳೆಯೂರು ರಸ್ತೆಯಿಂದ ನರಸೀಪುರಕ್ಕೆ ಸೇರವ ರಸ್ತೆ. | 8.20 |
| 30. | ಮುತ್ತಿಗೆ ಚಿಕ್ಕತಳಲು ಸರ್ಕಲ್ ಚಿಕ್ಕಬರಗಿಗೆ ಸೇರವ ರಸ್ತೆ. | 7.00 |
| 31. | ಚಿಕ್ಕೂರು ಕಾಳಿಹುಂಡಿ ಇಬ್ಬಾಲ ಶಂಕಹಳ್ಳಿ ರಸ್ತೆ. | 10.40 |
| 32. | ತುಂಬುಸೆಸೋಗೆಯಿಂದ ಕಬಿನಿ ಕಾಲೋನಿಗೆ ಸೇರುವ ರಸ್ತೆ. | 5.40 |
| 33. | ಬೂದನೂರು ಬೊಮ್ಮಲ್ಲಪುರ ರಸ್ತೆ ಬಿ.ಎಂ. ಹಳ್ಳಿ ಮಾರ್ಗ. | 10.00 |
| 34. | ದೇವರಾಜಕಾಲೋನಿ ಚಿಕ್ಕ ಕೆರೆಯೂರು ರಸ್ತೆ. | 5.00 |
| | **ಒಟ್ಟು** | **253.10** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ).

ಪಿ.ಆರ್. 948

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರ ಹುದ್ದೆಗಳನ್ನು ಕೆ.ಎ.ಎಸ್. (ಕಿರಿಯ ಶ್ರೇಣಿ) ವೃಂದದಿಂದ (ಹಿರಿಯ ಶ್ರೇಣಿ) ವೃಂದಕ್ಕೆ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 49 ಆಸೇವ 2001(2) ದಿನಾಂಕ: 28.8.2001.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 13 ಆಸೇವ 2003, ದಿನಾಂಕ: 28-01-2004.
3. ಕೆ.ಎ.ಎಸ್. ಅಧಿಕಾರಿಗಳ ಸಂಘದ ಮನವಿ ದಿನಾಂಕ:16.9.2006 ಮತ್ತು 7.10.2007.
4. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 11 ಆಸೇಇ 2006, ದಿನಾಂಕ: 20-02-2007.

**ಪ್ರಸ್ತಾವನೆ:**

ಕರ್ನಾಟಕ ಆಡಳಿತ ಸೇವಾ ಅಧಿಕಾರಿಗಳ ಸಂಘವು ಮೇಲೆ ಓದಲಾದ ಕ್ರಮ ಸಂಖ್ಯೆ (3) ರನ್ವಯ ಸರ್ಕಾರಕ್ಕೆ ಸಲ್ಲಿಸಿದ ಮನವಿಗಳಲ್ಲಿ ಕೆ.ಎ.ಎಸ್. ಅಧಿಕಾರಿಗಳ ಸೇವಾ ವಿಷಯಗಳಿಗೆ ಸಂಬಂಧಿಸಿದಂತೆ ಹಲವಾರು ಬೇಡಿಕೆಗಳನ್ನು ಈಡೇರಿಸುವಂತೆ ಕೋರಿರುತ್ತಾರೆ. ಸಂಘದ ಬೇಡಿಕೆಗಳನ್ನು ಪರಿಶೀಲಿಸಿ ಸರ್ಕಾರಕ್ಕೆ ಸೂಕ್ತ ಶಿಫಾರಸ್ಸ,ನ್ನು ಮಾಡಲು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಇತರೆ ಸದಸ್ಯರನ್ನೊಳಗೊಂಡಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ಸಲಹಾ ಸಮಿತಿಯನ್ನು ರಚಿಸಲಾಗಿತ್ತು. ಈ ಸಹಾ ಸಮಿತಿಯು ದಿನಾಂಕ:14.3.2007 ರಂದು ಸಭೆ ಸೇರಿ, ಸಂಘದ ಹಲವಾರು ಬೇಡಿಕೆಗಳ ಬಗ್ಗೆ ಚರ್ಚಿಸಿತು. ಸದರಿ ಬೇಡಿಕೆಗಳ ಪೈಕಿ ವಿವಿಧ ಜಿಲ್ಲೆಗಳಲ್ಲಿರುವ ಜಿಲ್ಲಾಧಿಕಾರಿಗಳ ಕಚೇರಿಯಲ್ಲಿ ಕೆ.ಎ.ಎಸ್. ಕಿರಿಯ ಶ್ರೇಣಿ ವೃಂದದ ಹುದ್ದೆಗಳಿಗೆ ನಿಗದಿಪಡಿಸಲಾದ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರ ಹುದ್ದೆಯ ಕಾರ್ಯಭಾರವು ಹೆಚ್ಚಿನ ಜವಾಬ್ದಾರಿಯುತವಾಗಿರುವುದನ್ನು ಕೇಂದ್ರಸ್ಥಾನದಲ್ಲಿರುವ ಜಿಲ್ಲಾಧಿಕಾರಿಗಳ ಕಚೇರಿಯ ಆಡಳಿತ ನಿರ್ವಹಣೆ ಹಾಗೂ ಇತರೆ ಇಲಾಖೆಗಳೊಂದಿಗೆ ಸಮನ್ವಯದೊಂದಿಗೆ ಪ್ರಗತಿ ಸಾಧಿಸಬೇಕಾದ ಪ್ರಾಮುಖ್ಯತೆಯನ್ನು ಹಾಗೂ ಜಿಲ್ಲಾಧಿಕಾರಿಗಳ ಪ್ರವಾಸದ ಅವಧಿಯಲ್ಲಿ ಜಿಲ್ಲಾಡಳಿತ ಕ್ಷೇತ್ರದಲ್ಲಿ ಹೆಚ್ಚು ಪರಿಣಾಮಕಾರಿಯಾಗಿ ನಿಭಾಯಿಸಬೇಕಾಗಿರುವ ಹಿನ್ನೆಲೆಯಲ್ಲಿ ಅದರಲ್ಲೂ ಕಾನೂನು ಮತ್ತು ಸುವ್ಯವಸ್ಥೆ ಪ್ರಕೃತಿ ವಿಕೋಪಗಳಂತಹ ಸೂಕ್ಷ್ಮವಾದ ಕರ್ತವ್ಯಗಳನ್ನು ಗಣನೆಗೆ ತೆಗೆದುಕೊಂಡು ಕಂದಾಯ ಇಲಾಖೆಯು ಪ್ರಸ್ತಾಪಿತ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರ ವೃಂದದ ಕೆ.ಎ.ಎಸ್. ಕಿರಿಯ ಶ್ರೇಣಿ ವೃಂದದ ಹುದ್ದೆಗಳನ್ನು ಕೆ.ಎ.ಎಸ್. ಹಿರಿಯ ಶ್ರೇಣಿ ವೃಂದದ ಹುದ್ದೆಗಳಿಗೆ ಮೇಲ್ದರ್ಜೆಗೇರಿಸಿ ಕೆ.ಎ.ಎಸ್. ಹಿರಿಯ ಶ್ರೇಣಿ ಅಧಿಕಾರಿಗಳಿಂದ ಭರ್ತಿ ಮಾಡಲು ಶಿಫರಸ್ಸು ಮಾಡಿರುವುದನ್ನು ಸಮಿತಿಯು ಪರಿಗಣಿಸಿ, ಅದರಂತೆ ಸಮಿತಿಯು ಶಿಫಾರಸ್ಸನ್ನು ಮಾಡಿರುತ್ತದೆ. ಕೆ.ಎ.ಎಸ್. ಕಿರಿಯ ಶ್ರೇಣಿ ವೃಂದಬಲವು 380 ಇದ್ದು. ಇದರಲ್ಲಿ 2 ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರ ಹುದ್ದೆಗಳನ್ನು ಕೆ.ಎ.ಎಸ್. ಹಿರಿಯ ಶ್ರೇಣಿ ವೃಂದಕ್ಕೆ ಮೇಲ್ದರ್ಜೆಗೇರಿಸುವುದರಿಂದ ಕೆ.ಎ.ಎಸ್. ಕಿರಿಯ ಶ್ರೇಣಿ ವೃಂದಬಲವು 380-27=353 ಆಗುತ್ತದೆ ಹಾಗೂ ಕೆ.ಎ.ಎಸ್. ಹಿರಿಯ ಶ್ರೇಣಿ ವೃಂದಬಲವು 100+27=127 ಆಗುತ್ತದೆ.

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 69 ಆಸೇವ 2007, ಬೆಂಗಳೂರು, ದಿನಾಂಕ: 23ನೇ ಮೇ 2007**

ರಾಜ್ಯದ ಎಲ್ಲಾ ಜಿಲ್ಲೆಯ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿರುವ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರ 27 ಕೆ.ಎ.ಎಸ್. ಸಮೂಹ - ಎ ಕಿರಿಯ ಶ್ರೇಣಿ ವೃಂದದ ಹುದ್ದೆಗಳನ್ನು ಕೆ.ಎ.ಎಸ್. ಸಮೂಹ-ಎ ಹಿರಿಯ ಶ್ರೇಣಿ ವೃಂದದ ಹುದ್ದೆಗಳನ್ನಾಗಿ ಮೇಲ್ದರ್ಜೆಗೇರಿಸಿದೆ. ಇದರಿಂದಾಗಿ ಕೆ.ಎ.ಎಸ್. ಹಿರಿಯ ಶ್ರೇಣಿ ಅಧಿಕಾರಿಗಳ ವೃಂದಬಲ 127 ಹಾಗೂ ಕೆ.ಎ.ಎಸ್. ಕಿರಿಯ ಶ್ರೇಣಿ ಅಧಿಕಾರಿಗಳ ವೃಂದಬಲ 353 ಎಂದು ಪುನರ್ ನಿಗದಿಪಡಿಸಿದೆ.

ಉಲ್ಲೇಖ (1) ಮತ್ತು (2) ರಲ್ಲಿನ ಆದೇಶಗಳು ಮೇಲ್ಕಂಡಂತೆ ಮಾರ್ಪಾಡುಗೊಳ್ಳುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 846 ವೆಚ್ಚ-5/2007 ದಿನಾಂಕ: 5-5-2007ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 963

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2) (ಪ್ರಭಾರ)

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಶ್ರೀ ಜಿ. ಸೀತಾರಾಮಪ್ಪ, ಜಿಲ್ಲಾ ಸಮನ್ವಯ ಅಧಿಕಾರಿ, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನಾ ಕಛೇರಿ, ಮಡಿಕೇರಿ ರವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ:**

1. ದಿನಾಂಕ: 12.01.2007, ಸಂಖ್ಯೆ:ಸಕಇ 349 ಬಿಇಟಿ 2006ರ ಸರ್ಕಾರಿ ಆದೇಶ.
2. ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂ. ಲೋಕ್/ಐಎನ್‌ವಿ(ಜಿ)/ಎಂ-33/ಸಿಆರ್-4/2006/ಮಡಿಕೇರಿ, ದಿನಾಂಕ:26.02.2007.
3. ತನಿಖಾಧಿಕಾರಿಯ ವರದಿ ಸಂಖ್ಯೆ:ಕಲೋ/ಮಪಿಎಸ್/ಸಿಆರ್.04/06, ದಿನಾಂಕ: 27.12.2006.
4. ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಕರಣದ ಸಾರಾಂಶ:**

ಶ್ರೀ ಜಿ. ಸೀತಾರಾಮಪ್ಪ, ಹಿಂದಿನ ಜಿಲ್ಲಾ ಸಮನ್ವಯ ಅಧಿಕಾರಿ, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನಾ ಕಛೇರಿ, ಮಡಿಕೇರಿ ಇವರ ವಿರುದ್ಧ ಗುನ್ನೆ ಸಂಖ್ಯೆ:04/2006ರಲ್ಲಿ ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಮಡಿಕೇರಿ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು (ಉಲ್ಲೇಖ-3 ಮತ್ತು 4) ಮಾನ್ಯ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ:26.02.2007 (ಉಲ್ಲೇಖ-2)ರೊಡನೆ ಕಳುಹಿಸುತ್ತಾ ಆಪಾದಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ, 1988ರ 19(1)(ಬಿ) ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಉಲ್ಲೇಖಿತ ಪತ್ರ ಸಂಖ್ಯೆ ಸಂ.ಲೋಕ್/ಐಎನ್‌ವಿ(ಜಿ)/ಎಂ-33/ಸಿಆರ್-4/2006/ ಮಡಿಕೇರಿ, ದಿನಾಂಕ: 26.02.2007 ರಲ್ಲಿ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1) ಶ್ರೀ ಕೆ. ಕರುಣ್ ಬಿನ್ ಕರೀಗೌಡ, ಮಾರ್ಕೆಟಿಂಗ್ ಎಕ್ಸಿಕ್ಯೂಟೀವ್, ಕ್ಲಸ್ಟರ್ (ವೃತ್ತಿ ತರಬೇತಿ), ಯೋಜನೆ ಸದ್ಗುರು ಎಜುಕೇಷನ್ ಟ್ರಸ್ಟ್, ಮಡಿಕೇರಿ ರವರ ಫಿರ್ಯಾದಿ ದಿನಾಂಕ:17.10.2006.
2) ಪ್ರಥಮ ವರ್ತಮಾನ ವರದಿ ಮಡಿಕೇರಿ, ಪ್ರಕರಣ ಸಂಖ್ಯೆ:04/2006.
3) ಪ್ರಾಯೋಗಿಕ ಪಂಚನಾಮೆ ದಿನಾಂಕ:17.10.2006

4) ಟ್ರ್ಯಾಪ್‌ನ ಮಹಜರ್ ದಿನಾಂಕ:17.10.2006

5) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ:ಎಂಆರ್‌ಎಲ್/ಎಲ್-4/-9/2006-07, ದಿನಾಂಕ:18.11.2006.

6) ಕೃತ್ಯ ನಡೆದ ಸ್ಥಳದ ನಕಾಶೆ ವರದಿಯಲ್ಲಿರುವಂತೆ.

7) ಸಾಕ್ಷಿಗಳ ಹೇಳಿಕೆಗಳು

| | | |
|---|---|---|
| 1. | ಶ್ರೀ ಎಂ. ರಂಗಸ್ವಾಮಿ, ಬಿನ್ ಎಂ.ಆರ್. ಮಂಜುನಾಥ್,<br>ಸಹ ಶಿಕ್ಷಕರು, ಸರ್ಕಾರಿ ಪದವಿಪೂರ್ವ ಕಾಲೇಜು,<br>(ಹೈಸ್ಕೂಲ್ ವಿಭಾಗ) ಸುಂಟಿಕೊಪ್ಪ, ಸೋಮವಾರಪೇಟೆ ತಾಲ್ಲೂಕು, ಕೊಡಗು ಜಿಲ್ಲೆ | ದಿನಾಂಕ:17.10.2006. |
| 2. | ಶ್ರೀ ಎ.ಎಂ. ಚಂಗಪ್ಪ, ತಂದೆ ಲೇಟ್ ಇ.ಕೆ. ಮಾಚಯ್ಯ,<br>ಸಹ ಶಿಕ್ಷಕರು, ಸರ್ಕಾರಿ ಪದವಿಪೂರ್ವ ಕಾಲೇಜು<br>(ಹೈಸ್ಕೂಲ್ ವಿಭಾಗ) ಸುಂಟಿಕೊಪ್ಪ, ಸೋಮವಾರ ಪೇಟೆ ತಾಲ್ಲೂಕು, ಕೊಡಗು ಜಿಲ್ಲೆ. | ದಿನಾಂಕ:17.10.2006. |

8) ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳ ಸಂಖ್ಯೆ:

1) ಯೋಸಾ/ಗಿಉಯೋ/ಎ-5/ಸಿಆರ್-18/2004-05, ದಿನಾಂಕ:06.12.2005, 29.12.2005, 24.03.2006.

ವಿಷಯ: ಪ್ರಮಾಣ ಪತ್ರ/ಅಫಿಡವಿಟ್ ಹಾಗೂ ಡ್ರೈವಿಂಗ್ ಲೈಸನ್ಸ್ ಕಳುಹಿಸುವ ಬಗ್ಗೆ.

9) ಆಪಾದಿತರ ಸಮಜಾಯಿಷಿ ಹೇಳಿಕೆಗಳು

ಶ್ರೀ ಜಿ. ಸೀತಾರಾಮಪ್ಪ, ಹಿಂದಿನ ಯೋಜನಾ ಸಮನ್ವಯಾಧಿಕಾರಿ, ಐ.ಟಿ.ಡಿ.ಪಿ. ಮಡಿಕೇರಿ ಜಿಲ್ಲೆ.

ತನಿಖಾಧಿಕಾರಿಗಳಾದ ಶ್ರೀ ಡಿ. ಜಯರಾಮು, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಮಡಿಕೇರಿ ಇವರು ಶ್ರೀ ಜಿ. ಸೀತಾರಾಮಪ್ಪ, ಜಿಲ್ಲಾ ಯೋಜನಾ ಸಮನ್ವಯ ಅಧಿಕಾರಿ, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನಾ ಕಛೇರಿ, ಮಡಿಕೇರಿ ಪೊಲೀಸ್ ಠಾಣೆಯಲ್ಲಿ ಗುನ್ನೆ ಸಂಖ್ಯೆ 04/2006ರಲ್ಲಿ ಲಂಚ ನಿರೋಧಕ ಕಾಯ್ದೆ, 1988ರ ಕಲಂ 7 13(1)(ಡಿ) ಜೊತೆಯಲ್ಲಿ 13(2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರು ಶ್ರೀ ಜಿ. ಸೀತಾರಾಮಪ್ಪ, ಜಿಲ್ಲಾ ಯೋಜನಾ ಸಮನ್ವಯ ಅಧಿಕಾರಿ, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ, ಮಡಿಕೇರಿ ಇವರು ಫಿರ್ಯಾಧಿಯಾದ ಶ್ರೀ ಕೆ. ಕರಣ್ ಬಿನ್ ಕರಿಗೌಡ, ಮಾರ್ಕೆಟಿಂಗ್ ಎಕ್ಸಿಕ್ಯೂಟೀವ್, ಕ್ಲಸ್ಟರ್ (ವೃತ್ತಿ ತರಬೇತಿ), ಯೋಜನೆ, ಸದ್ಗುರು ಎಜುಕೇಷನ್ ಟ್ರಸ್ಟ್, ಮಡಿಕೇರಿ ಇವರ ಎಜುಕೇಷನ್ ಟ್ರಸ್ಟ್ ವತಿಯಿಂದ 371 ಜನ ಗಿರಿಜನ ಅಭ್ಯರ್ಥಿಗಳಿಗೆ ತರಬೇತಿಯನ್ನು ನೀಡಿ ಅಭ್ಯರ್ಥಿಗಳಿಗೆ ತರಬೇತಿಯ ಪ್ರಮಾಣ ಪತ್ರ ನೀಡಬೇಕಾದ ಸರ್ಕಾರಿ ಕೆಲಸವನ್ನು ಮಾಡಲು ರೂ.20,000/- ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ.

ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸಾರ್ವಜನಿಕ ನೌಕರನ/ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ:17.10.2006 ರಂದು ಮಡಿಕೇರಿ ಜಿಲ್ಲೆಯ ಬಾಳುಗೋಡು ಗ್ರಾಮದಲ್ಲಿರುವ ಸರ್ಕಾರ ಏಕಲವ್ಯ ಮಾದರಿ ವಸತಿ ಶಾಲೆಯಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ಜಿ. ಸೀತಾರಾಮಪ್ಪ, ಯೋಜನಾ ಸಮನ್ವಯಾಧಿಕಾರಿ, ಐ.ಟಿ.ಡಿ.ಪಿ. ಮಡಿಕೇರಿ ರವರು ಅಕ್ರಮ ಸಂಭಾವನೆಯಾದ 20,000/- ರೂ.ಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿ ಹಾಕಿ ಕೊಂಡಿರುತ್ತಾರೆ. ಆಪಾದಿತ ಸಾರ್ವಜನಿಕ ನೌಕರನ/ಅಧಿಕಾರಿಯ ಬಲಗೈ ಮತ್ತು ಎಡಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಹಾಗೂ ದ್ರಾವಣವನ್ನು ಫಿನಾಪ್ತಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸಾರ್ವಜನಿಕ ಅಧಿಕಾರಿ/ನೌಕರರ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾವನೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ.20,000/- ಗಳನ್ನು ಶ್ರೀ ಜಿ. ಸೀತಾರಾಮಪ್ಪ ರವರಿಂದ ಘಟನೆ ನಡೆದ ಸ್ಥಳದಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಆರೋಪಿತ ಅಧಿಕಾರಿಯಾದ ಶ್ರೀ ಜಿ. ಸೀತಾರಾಮಪ್ಪ, ಯೋಜನಾ ಸಮನ್ವಯಾಧಿಕಾರಿ, ಜಿಲ್ಲಾ ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ, ಮಡಿಕೇರಿ ಇವರು ಸಾರ್ವಜನಿಕ ಕೆಲಸವನ್ನು ನಿರ್ವಹಿಸಲು ಸಂಬಂಧಪಟ್ಟ ಟ್ರಸ್ಟ್ ನವರಿಂದ ಅಕ್ರಮ ಸಂಭಾವನೆ ಸ್ವೀಕರಿಸಿರುವುದು ಮೇಲ್ಕಂಡ ವಿವರಗಳಿಂದ ಮೇಲುನೋಟಕ್ಕೆ ಸಾಬೀತಾಗಿರುತ್ತದೆ. ಆದುದರಿಂದ ಈ ಪ್ರಕರಣವು ಲೋಕಾಯುಕ್ತ ತನಿಖೆಗೆ ಒಳಪಡಬೇಕಾದ ಪ್ರಕರಣವಾಗಿರುತ್ತದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ - 1988ರ ಕಲಂ 7, 13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲುನೋಟಕ್ಕೆ ನನಗೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ -1988ರ ಕಲಂ 7, 13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯಕ ಎಂದು ಸರ್ಕಾರ ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತನನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. ಆದ್ದರಿಂದ ಆಪಾದಿತ ಅಧಿಕಾರಿಯಾದ ಶ್ರೀ ಜಿ. ಸೀತಾರಾಮಪ್ಪ, ಹಿಂದಿನ ಯೋಜನಾ ಸಮನ್ವಯಾಧಿಕಾರಿ, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ, ಮಡಿಕೇರಿ ಇವರನ್ನು ಲಂಚ ನಿರೋಧಕ ಕಾಯ್ದೆ, 1988ರ ಕಲಂ 7, 13(1)(ಡಿ) ಜೊತೆಗೆ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವು ಸರ್ಕಾರ ಹೊಂದಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂ.ಸಕಇ 349 ಬಿಇಟಿ 2006, ಬೆಂಗಳೂರು, ದಿನಾಂಕ: 22ನೇ ಮೇ 2007**

ಆರೋಪಿಯಾದ ಶ್ರೀ ಜಿ. ಸೀತಾರಾಮಪ್ಪ, ಜಿಲ್ಲಾ ಸಮನ್ವಯ ಅಧಿಕಾರಿ, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನಾ ಕಛೇರಿ, ಮಡಿಕೇರಿ, ಇವರನ್ನು ಹುದ್ದೆಯಿಂದ ತೆಗೆದು ಹಾಕುವ(ವಜಾ ಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಜಿ. ಸೀತಾರಾಮಪ್ಪ, ಜಿಲ್ಲಾ ಸಮನ್ವಯ ಅಧಿಕಾರಿ, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ ಮಡಿಕೇರಿ, ಇವರನ್ನು ಲಂಚ ನಿರೋಧಕಕಾಯ್ದೆ, 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಪ್ರಕಾರ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಈ ಮೂಲಕ ಮಂಜೂರಾತಿಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಂ. ಚಿಂದಾನಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ-II,

ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 945

## ಕಂದಾಯ ಸಚಿವಾಲಯ

**ವಿಷಯ:** ಕಂದಾಯ ಇಲಾಖೆಯಲ್ಲಿ ಮಿತವೇತನದ ಆಧಾರದ ಮೇಲೆ ಮಂಜೂರಾಗಿರುವ 10450 ಗ್ರಾಮಸಹಾಯಕರ ಹುದ್ದೆಗಳನ್ನು ಖಾಯಂಗೊಳಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಕಂಇ 3 ಎಂ.ವಿ.ಎಸ್.77 ದಿ.16.09.1978.

2. ಸರ್ಕಾರದ ಆದೇಶ ಸಂಖ್ಯೆ:ಕಂಇ 82ಎಂ.ವಿ.ಎಸ್.(1)82,ದಿ.23.09.1982

3. ಸರ್ಕಾರದ ಆದೇಶ ಸಂಖ್ಯೆ: ಕಂಇ 474 ಬಿಎಸ್‌ಸಿ2005,ದಿ:3.5.2007

**ಪ್ರಸ್ತಾವನೆ:**

ಕರ್ನಾಟಕ ಗ್ರಾಮಕಛೇರಿ ರದ್ದತಿ ಕಾಯ್ದೆ, 1961ರ 4ನೇ ನಿಯಮಗಳು ದಿ.1.2.1963ರಿಂದ ಅನ್ವಯವಾಗುವಂತೆ ವಂಶಪಾರಂಪರ್ಯದಿಂದ ಎಲ್ಲಾ ಗ್ರಾಮೀಣ ಹಂತದ Village officers ಹುದ್ದೆಗಳು ರದ್ದಾದ್ದರಿಂದ ಕೆಳಹಂತದ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ನೌಕರರನ್ನು ತಾತ್ಕಾಲಿಕ ಆಧಾರದ ಮೇಲೆ ಯಾವುದೇ ವಂಶಪಾರಂಪರಾಗತ ಹಕ್ಕುಗಳು ಅನ್ವಯ ವಾಗದಂತೆ ಕಾಲಕಾಲಕ್ಕೆ ಅನುಗುಣವಾಗಿ ಆಡಳಿತಾತ್ಮಕ ಅನುಕೂಲಕ್ಕಾಗಿ ದಿ.31.12.1978ರಿಂದ ಗ್ರಾಮಲೆಕ್ಕಿಗರಿಗೆ ಸಹಾಯ ಮಾಡಲು ಗ್ರಾಮಸಹಾಯಕರ ಹುದ್ದೆಗಳನ್ನು ಸೃಜಿಸಲಾಗಿದೆ. ಇದರನ್ವಯ ಸರ್ಕಾರಿ ಆದೇಶ ಸಂ:ಆರ್.ಡಿ.3 ಎಂ.ವಿ.ಎಸ್. 1977,ದಿ.16.9.1978ರಲ್ಲಿ ರಾಜ್ಯದ 19ಜಿಲ್ಲೆಗಳಿಗೆ 8941 ಹುದ್ದೆಗಳನ್ನು ಮಿತವೇತನದ ಆಧಾರದ ಮೇಲೆ ಮಂಜೂರು ಮಾಡಲಾಗಿದೆ. ಇದಲ್ಲದೆ ಪುನ: ಸರ್ಕಾರದ ಆದೇಶ ಸಂಖ್ಯೆ:ಆರ್.ಡಿ82 ಎಂ.ವಿ.ಎಸ್.(1)82 ದಿ.23.9.1982ರಲ್ಲಿ 1509 ಹೆಚ್ಚುವರಿಯಾಗಿ ಒಟ್ಟು 10450 ಹುದ್ದೆಗಳನ್ನು ಓದಲಾದ (1) ಮತ್ತು (2) ರಲ್ಲಿ ಮಂಜೂರು ಮಾಡಲಾಗಿದೆ. ಸದರಿ ಹುದ್ದೆಗಳನ್ನು ಕಾಲಕಾಲಕ್ಕೆ ಅನುಗುಣವಾಗಿ(ಪ್ರತಿ ವರ್ಷವೂ) ಮುಂದುವರೆಸಿಕೊಂಡು ಬರುತ್ತಾ ಕೊನೆಯದಾಗಿ ಈಗ ನೀಡುತ್ತಿರುವ ಮಾಸಿಕ ಮಿತವೇತನ ರೂ.2000/-(ರೂಪಾಯಿ ಎರಡು ಸಾವಿರ ಮಾತ್ರ)ಗಳಂತೆ ದಿನಾಂಕ:1.4.2007ರಿಂದ 31.3.2008 ರವರೆಗೆ ತಾತ್ಕಾಲಿಕವಾಗಿ ಮೇಲೆ ಓದಲಾದ (3) ರಲ್ಲಿ ಮುಂದುವರೆಸಲಾಗಿದೆ.

ಕಂದಾಯ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಕಂದಾಯ ವಸೂಲಾತಿ, ಜನನಮರಣ ನೋಂದಾವಣಿ, ಪ್ರಕೃತಿ ವಿಕೋಪ ಮತ್ತು ಸರ್ಕಾರದ ಮುಖ್ಯವಾದ ಕಾರ್ಯಕ್ರಮಗಳನ್ನು ಗ್ರಾಮಮಟ್ಟದಲ್ಲಿ ಅನುಷ್ಟಾನಗೊಳಿಸಲು ಸಹಕಾರಿಯಾಗುವ ಅವಶ್ಯಕತೆಯನ್ನು ಗಣನೆಗೆ ತೆಗೆದುಕೊಂಡು ಆ ಹುದ್ದೆಗಳನ್ನು ಸರ್ಕಾರದ ಆದೇಶ ಸಂ:ಕಂ.ಇ.1ಬಿಎಸ್.ಸಿ.2005 ದಿನಾಂಕ:18.12.2006ರಲ್ಲಿ ದಿನಾಂಕ;1.7.2006ರಿಂದ ದಿ.31.3.07 ರವರೆಗೆ ಮುಂದುವರಿಸಲಾಗಿದೆ. ಗ್ರಾಮಸಹಾಯಕರುಗಳು ಗ್ರಾಮಲೆಕ್ಕಿಗರಿಗೆ ಈ ಕೆಳಕಂಡ ಮುಖ್ಯ ಕಾರ್ಯಗಳನ್ನು ನಿರ್ವಹಿಸಲು ಸಹಕರಿಸುತ್ತಾರೆ.

1. ಸರ್ಕಾರಕ್ಕೆ ಬರಬೇಕಾದ ಕಂದಾಯ ಬಾಕಿ ವಸೂಲಿಯಲ್ಲಿ ಗ್ರಾಮಲೆಕ್ಕಾಧಿಕಾರಿಗೆ ಸಹಾಯ ಮಾಡುವುದು,
2. ಭೂದಾಖಲೆಗಳಾದ ಪಹಣಿ, ಖಾತೆ ಖರೀದಿಗಳನ್ನು ಪ್ರತಿ ವರ್ಷಗಳಿಗೆ ರೈತರಿಗೆ ಒಂದು ಪ್ರತಿ ಉಚಿತವಾಗಿ ಒದಗಿಸಲು ಗ್ರಾಮಲೆಕ್ಕಾಧಿಕಾರಿಗೆ ಸಹಾಯ ಮಾಡುವುದು,
3. ಖಾತೆದಾರರು ಮರಣ ಹೊಂದಿದಾಗ ಜಮೀನು ವಿಭಾಗ ಮಾರಾಟ ಮಾಡಿದಾಗ ಮ್ಯುಟೇಶನ್ ವಹಿಯಲ್ಲಿ ಖಾತೆ ಟಿ.ಸಿ.ಯಲ್ಲಿ ಬದಲಾವಣೆ ಮಾಡುವುದು, ಪಹಣಿ ನಕಲು ನೀಡುವುದರಲ್ಲಿ ಸ್ಥಳೀಯ ಮಾಹಿತಿ ಒದಗಿಸುವುದು,
4. ಜಿಲ್ಲಾ ಪರಿಷತ್‌ವತಿಯಿಂದ ಐ.ಆರ್.ಡಿ.ಪಿ.ಯೋಜನೆಯ ಅನುಷ್ಠಾನಕ್ಕೆ ಫಲಾನುಭವಿಗಳನ್ನು ಗುರುತಿಸಲು ಸಹಾಯ ಮಾಡುವುದು,
5. ರೈತರಿಗೆ ಕೃಷಿ ಕಾರ್ಡುಗಳನ್ನು ನೀಡುವುದು,
6. ಜನನ:ಮರಣ ನೋಂದಾವಣೆ ಬಗ್ಗೆ ಸ್ಥಳೀಯ ಮಾಹಿತಿ ನೀಡುವುದು, ಸಾರ್ವಜನಿಕರಿಗೆ:ರೈತರಿಗೆ:ವಿದ್ಯಾರ್ಥಿಗಳಿಗೆ ಅವಶ್ಯಕವಾದ ವಿವಿಧ ರೀತಿಯ ಧೃಡೀಕರಣ ಪತ್ರಗಳನ್ನು ನೀಡುವಲ್ಲಿ ಮಾಹಿತಿ ಒದಗಿಸುವುದು;ಅಂದರೆ ಆದಾಯ:ಜಾತಿ: ವಾಸ್ತವ್ಯ
7. ಇತ್ಯಾದಿಗಳ ಧೃಢೀಕರಣ ಪತ್ರಗಳ ವಿಚಾರಣೆಯಲ್ಲಿ ಸಹಾಯ ಮಾಡುವುದು,
8. ಸರ್ಕಾರದ ಯಾವುದೇ ಹೊಸ ಯೋಜನೆಗಳನ್ನು ಜಾರಿಗೆ ತರುವಾಗ ಅದರ ಅನುಷ್ಠಾನದ ಜವಾಬ್ದಾರಿ ಮೊದಲು ತೆಗೆದುಕೊಂಡು ಅವುಗಳನ್ನು ಗ್ರಾಮಮಟ್ಟದಲ್ಲಿ ಸಾರ್ವಜನಿಕರಿಗೆ ತಲುಪಿಸಲು ಸಹಕಾರ ಹಾಗೂ ಯೋಜನೆಗಳು ಕಾರ್ಯಗತವಾಗುವಂತೆ ನೋಡಿಕೊಳ್ಳುವುದು,
9. ಗ್ರಾಮಮಟ್ಟದಲ್ಲಿ ಸಂಭವಿಸುವ ಬೆಂಕಿ ಅನಾಹುತ, ಪ್ರಕೃತಿ ವಿಕೋಪಗಳ ಬಗ್ಗೆ ಪರಿಹಾರ ನೀಡುವಲ್ಲಿ ಮತ್ತು ಬರಪರಿಹಾರದ ಕಾರ್ಯನಿರ್ವಹಣೆಯ ಬಗ್ಗೆ ಅಗತ್ಯ ಮಾಹಿತಿ ಮತ್ತು ಕಡತ ತಯಾರಿಸಿ ಸಾರ್ವಜನಿಕರಿಗೆ ಎಲ್ಲಾ ರೀತಿಯ ಸಹಕಾರ ನೀಡುವುದು,

10.ವೃದ್ಯಾಪ್ಯವೇತನ; ಅಂಗವಿಕಲರ ವೇತನ;ವಿಧವಾ ವೇತನ-ಕಲಾವಿದರ ಮಾಸಾಶನ ಮಂಜೂರಾದ ಬಗ್ಗೆ ಕಡತಗಳನ್ನು ತಯಾರಿಸುವಾಗ ಮಾಹಿತಿ ಪಡೆಯುವುದು,

ಈ ಗ್ರಾಮಸಹಾಯಕರುಗಳಿಗೆ ಮೊದಲಿಗೆ ಮಾಸಿಕವಾಗಿ ಪ್ರತಿ ಒಬ್ಬರಿಗೆ ರೂ.100/-ರಂತೆ ಮಿತವೇತನ ರೂಪದಲ್ಲಿ ನೀಡಲಾಗುತ್ತಿತ್ತು. ಈ ಮೊತ್ತವನ್ನು ಸರ್ಕಾರದ ಆದೇಶ ಸಂ:ಆರ್.ಡಿ.232ಎಂವಿಎಸ್ 1981,ದಿ.5.6.1981ರನ್ವಯ ರೂ.120/-ರಂತೆ ಹೆಚ್ಚಿಸಲಾಯಿತು. ಪುನ: ಈ ಮೊತ್ತವನ್ನು ಸರ್ಕಾರದ ಆದೇಶ ಸಂ:ಆರ್.ಡಿ.220ಎಂ.ವಿ.ಎಸ್.1991, ದಿ.31.10.1991ರಲ್ಲಿ ರೂ.600/-ರಂತೆ ಮಾಸಿಕವಾಗಿ ಹೆಚ್ಚಿಸಲಾಯಿತು. ಪುನ: ಈ ಮೊತ್ತವನ್ನು ಸರ್ಕಾರಿ ಆದೇಶ ಸಂ: ಆರ್.ಡಿ.250ಬಿಎಸಿ2002, ದಿ.3.11.2002ರನ್ವಯ ಮಾಸಿಕವಾಗಿ ರೂ.1000/-ದಂತೆ ನೀಡಲಾಯಿತು. ತದನಂತರ ಸರ್ಕಾರದ ಆದೇಶ ಸಂಖ್ಯೆ:ಆರ್.ಡಿ.1ಬಿಎಸ್.ಸಿ.2005 ದಿ.1.8.2005ರಿಂದ 31.3.2006ರವರೆಗೆ ಸದರಿ ನೌಕರರ ಸಂಭಾವನೆಯನ್ನು ರೂಪಾಯಿ 1000/-ರಿಂದ 2000ಕ್ಕೆ ಹೆಚ್ಚಿಸಲಾಗಿದೆ.

ಕೆಲವು ಗ್ರಾಮಸಹಾಯಕರು ಮಾನ್ಯ ಕೆ.ಎ.ಟಿ.ಗೆ ಅರ್ಜಿ ಸಂ:6233-36/ 1995ನ್ನು ಸಲ್ಲಿಸಿ ಅವರ ಸೇವೆಯನ್ನು ಗ್ರೂಪ್ ಡಿ ನೌಕರರೆಂದು ಖಾಯಂಗೊಳಿಸ ಬೇಕೆಂದು ಕೇಳಿಕೊಂಡಿದ್ದರು. ಮಾನ್ಯ ಕೆ.ಎ.ಟಿಯು ದಿ.05.12.1996ರಂದು ತನ್ನ ತೀರ್ಪು ನೀಡಿ ಸದರಿ ಗ್ರಾಮಸಹಾಯಕರ ಸೇವೆಯನ್ನು ಗ್ರೂಪ್ ಡಿ ನೌಕರರಾಗಿ ಖಾಯಂಗೊಳಿಸಲು ಅದಕ್ಕೆ ಸಂಬಂದಪಟ್ಟಂತೆ ನಿಯಮಾವಳಿಗಳನ್ನು ರಚಿಸಲು ಸೂಚಿಸಿದೆ. ಆದೇಶದ ತೀರ್ಪು ಈ ಕೆಳಕಂಡಂತೆ ಇದೆ.

" I have no doubt in mind that who are appointed to render service to the State, should be guaranteed minimum service conditions. The State should not be allowed to exploit the unemployed mass in the State by just creating posts and appointing them on a fixed salary perennially . It is also clear that Gramsahayaks cannot be treated lower to any of the Group D employees. The minimum pay governing Group D employees shall have to be paid to the Gramasahayaks also. Applicants are not paid dearness allowance even though the money is going down every day. In the circumstances, I direct that the Gramsahayaks shall be paid a sum of Rs.900/-per month till the State Government comes out with a proper Cadre Recruitment Rules "

ಮೇಲ್ಕಂಡ ಕೆ.ಎ.ಟಿ. ಆದೇಶವನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಎಸ್.ಎಲ್.ಪಿ.ನಂ;4559-4562/1998ಸಲ್ಲಿಸಿದ ಮೇರೆಗೆ ಮಾನ್ಯ ಸರ್ವೋಚ್ಚ ನ್ಯಾಯಾಲಯವು ಸರ್ಕಾರವು ಸಲ್ಲಿಸಿದ ಎಸ್.ಎಲ್.ಪಿ.ಮೇಲೆ ತನ್ನ ಅಂತಿಮ ತೀರ್ಪನ್ನು ದಿ.27.9.2001ರಂದು ನೀಡಿದೆ. ತೀರ್ಪಿನ ಸಾರಾಂಶ ಈ ಕೆಳಕಂಡಂತೆ ಇದೆ.

" Considering the nature and circumstances of the case, it is a fit case in which we should not interfere with the humane order made by the Tribunal . The Tribunal took note of the fourth pay commission report and also of the fact that several persons who had been appointed had been continuing from 1978 upto the date of the order passed by the Tribunal and there after also. In such circumstances Tribunal directed the framing of appropriate Scheme or Rules regulating the service conditions of the Gramasahayakas and fix the pay scales for them and make adhoc arrangements till such rules are made. Let such Rules be framed within a period of 6 months from today, if not already done. The appeals are dismissed accordingly."

ಮಾನ್ಯ ಸರ್ವೋಚ್ಚನ್ಯಾಯಾಲಯವು ದಿ.27.9.2001ರಂದು ನೀಡಿದ ತೀರ್ಪು ಗ್ರಾಮ ಕಚೇರಿ ರದ್ದತಿ ಕಾಯ್ದೆಗನುಗುಣವಾಗಿ ರದೆ ಇದ್ದುದರಿಂದ ರಾಜ್ಯಸರ್ಕಾರವು ಪುನ: ಸರ್ವೋಚ್ಚ ನ್ಯಾಯಾಲಯದಲ್ಲಿ ರಿವ್ಯೂ ಪಿಟಿಷನ್ ಸಲ್ಲಿಸಿದಾಗ ಸರ್ವೋಚ್ಚ ನ್ಯಾಯಾಲಯವು ರಾಜ್ಯಸರ್ಕಾರವು ಮಂಡಿಸಿರುವ ವಿಷಯವನ್ನು ಎತ್ತಿಹಿಡಿದು Karnataka Village Abolition Act ರನ್ವಯ ಸದರಿ ಗ್ರಾಮಸಹಾಯಕರ ಹುದ್ದೆ ಗಳನ್ನು ಖಾಯಂಗೊಳಿಸಲು ಬರುವುದಿಲ್ಲವೆಂದು ತಿಳಿಸಿದೆ. ಸರ್ವೋಚ್ಚನ್ಯಾಯಾಲಯದ ತೀರ್ಪಿನ ಸಾರಾಂಶ ಈ ಕೆಳಕಂಡಂತೆ ಇದೆ.

"Although they were appointed on contact basis for a period of 5 years ,they are still continuing . In view of the fact that the validity of the Karnataka Village Abolition Act has been up held by this Court and no appointment on hereditary basis could be made we are of the view that no order for regularization of services could be passed in their favour. As a logical corollary, no scheme for regularization of services could be framed. However, since, the Tribunal directed the appellant to pay a sum of Rs.900/- per month till the Govt. come out with the scheme and as the respondents

are being paid Rs.1000/- we are not inclined to interfere with that part of order under challenge. The State exercise of jurisdiction under the provision appended to Article No.309 of the constitution of India is entitled to make Rules laying down the terms and conditions of service.(sic) The appellants state that the job of Grama sahayaks and other village officers are seasonal and part time . They are entitled to carry on their other job including the cultivation work. It was contended that the State intends to frame Rules having regard to the requirements for such number of posts as may be necessary for collection of the revenue. They undoubtedly have such a power. With the aforesaid observations, these appeals stand disposed of.

The learned counsel appearing for the respondents urged that since the respondents have been serving for a long time, some observations may be made for their regularization . We are of the view that no such observations can be made in view of the fact that despite abolition of such posts they have been appointed and continued in service. Therefore , we are not disposed to entertain this argument ."

ಮೇಲ್ಕಂಡ ಎಲ್ಲಾ ಅಂಶಗಳು ಸರ್ಕಾರದಲ್ಲಿ ಪರಿಶೀಲನೆಯಲ್ಲಿರುವಾಗಲೇ ಕರ್ನಾಟಕ ಆಡಳಿತ ಸುಧಾರಣಾ ಆಯೋಗವು ತನ್ನ ತೀರ್ಪನ್ನು ಸಲ್ಲಿಸುವಾಗ ಒಟ್ಟು ಗ್ರಾಮಸಹಾಯಕರ ಹುದ್ದೆಗಳಾದ 10450 ಗಳನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ರದ್ದುಪಡಿಸಬೇಕೆಂದು ಶಿಫಾರಸ್ಸು ಮಾಡಿದೆ. ಗ್ರಾಮಸಹಾಯಕರ ಹುದ್ದೆಗಳನ್ನು ರದ್ದುಗೊಳಿಸಲು ಮಾಡಿರುವ ಶಿಫಾರಸ್ಸುಗಳು ಇಲಾಖೆಯ ಮೇಲೆ ತೀವ್ರತರವಾದ ದುಷ್ಪರಿಣಾಮ ಉಂಟು ಮಾಡಿರುವುದರಿಂದ ಅವರ ಸೇವೆಯ ಅಗತ್ಯತೆ ಮತ್ತು ಅವಶ್ಯಕತೆಯನ್ನು ಪರಿಗಣಿಸಿ ಗ್ರಾಮಸಹಾಯಕರ ಸೇವೆ ತೃಪ್ತಿಕರವಾಗಿದ್ದರಿಂದ ಸಚಿವ ಸಂಪುಟದ ಮತ್ತು ಆರ್ಥಿಕ ಇಲಾಖೆಯ ಅನುಮೋದನೆಯೊಂದಿಗಿ ಿ ಅವರ ಸೇವೆಯನ್ನು ಕಾಲಕಾಲಕ್ಕೆ ಮುಂದುವರಿಸುತ್ತಾ ಬಂದಿದ್ದು, ಪ್ರಸ್ತುತ ದಿನಾಂಕ:31.3.2008ರವರೆಗೆ ಮುಂದುವರೆಸಲಾಗಿದೆ. ನಮ್ಮ ರಾಜ್ಯದ ನೆರೆ ರಾಜ್ಯವಾದ ತಮಿಳುನಾಡಿನಲ್ಲಿಯೂ ಸಹ ಗ್ರಾಮಸಹಾಯಕರ ಹುದ್ದೆ ಗಳಿದ್ದು ಅವರುಗಳಿಂದ ಉತ್ತಮವಾದ ಸೇವೆಯನ್ನು ಆ ಸರ್ಕಾರವು ಪಡೆಯುತ್ತಿದೆ. ಮಧ್ಯಪ್ರದೇಶ, ಗುಜರಾತ್ ಗಳಲ್ಲಿ ಇಂತಹ ನೌಕರರ ಹುದ್ದೆಗಳಿವೆ.

ರಾಜ್ಯದಲ್ಲಿ 30,000ಗ್ರಾಮ ಮತ್ತು 5500ಗ್ರಾಮಪಂಚಾಯಿತಿಗಳಿದ್ದು ಈ ಗ್ರಾಮಗಳಲ್ಲಿ ಹಾಲಿ ಒಟ್ಟು 9607 ಗ್ರಾಮಸಹಾಯಕರು ಕರ್ತವ್ಯನಿರ್ವಹಿಸುತ್ತಿದ್ದಾರೆ. ಅಂದರೆ, ಸರಾಸರಿ 3ರಿಂದ 4ಗ್ರಾಮಗಳಿಗೆ ಒಬ್ಬ ಗ್ರಾಮಸಹಾಯಕರು ಕರ್ತವ್ಯ ನಿರ್ವಹಿಸುತ್ತಿದ್ದು,ಸರಾಸರಿ ಒಂದು ಗ್ರಾಮಪಂಚಾಯಿತಿಗೆ 1ರಿಂದ 6ಗ್ರಾಮಗಳು ಒಳಪಡುತ್ತವೆ. ಆದ್ದರಿಂದ ಗ್ರಾಮಸಹಾಯಕರುಗಳು ಬಹಳ ಪ್ರಾಮುಖ್ಯವಾದ ಸರ್ಕಾರದ ಕಾರ್ಯಗಳನ್ನು ಗ್ರಾಮಗಳ ಹಂತದಲ್ಲಿ ನಿರ್ವಹಿಸುತ್ತಿದ್ದಾರೆ. ಇವರ ಸೇವೆಯು ಕಂದಾಯ ಇಲಾಖೆಗೆ ಅಷ್ಟೆ ಒಳಪಡದೇ ಇವರ ಸೇವೆಯನ್ನು ಇತರ ಇಲಾಖೆಗಳಾದ ಪೋಲಿಸ್,ಕೃಷಿ,ಗ್ರಾಮೀಣಾಭಿವೃದ್ಧಿ ಇಲಾಖೆಗಳು ಸಹ ಬಳಸಿಕೊಳ್ಳುತ್ತಿದ್ದಾರೆ. ಆದ್ದರಿಂದ ಸದರಿ ಗ್ರಾಮಸಹಾಯಕರ ಸೇವೆಯು ಸರ್ಕಾರದಲ್ಲಿ ಅತ್ಯವಶ್ಯವಾಗಿರುತ್ತದೆ.

ಕಂದಾಯ ಇಲಾಖೆಯ ಗ್ರಾಮಸಹಾಯಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ ಮತ್ತು ಹಾಲಿ ಕಾರ್ಯನಿರ್ವಹಿಸುತ್ತಿರುವ ಗ್ರಾಮಸಹಾಯಕರ ಸೇವೆಯನ್ನು ಸಕ್ರಮಗೊಳಿಸುವ ಬಗ್ಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವಾ ನಿಯಮ)ದ ಅಭಿಪ್ರಾಯ ಕೋರಲಾಗಿ, ಅಭಿಪ್ರಾಯ ಈ ಕೆಳಕಂಡಂತೆ ಇರುತ್ತದೆ.

(1) ಗ್ರಾಮಸಹಾಯಕ ಹುದ್ದೆಗಳು ಮಿತವೇತನ ಹುದ್ದೆಗಳು (Stipendry Post) ಅವುಗಳಿಗೆ ನಿರ್ದಿಷ್ಟ ವೇತನ ಶ್ರೇಣಿಯನ್ನು ನಿಗದಿ ಪಡಿಸಿಲ್ಲ. ಅವುಗಳನ್ನು ಕಾಲಕಾಲಕ್ಕೆ ಮುಂದುವರಿಸಲಾಗುತ್ತಿದೆಯೆಂದು ಕಂಡು ಬರುತ್ತದೆ. ಈ ಹುದ್ದೆಗಳನ್ನು ದಿ.1.4.2005ರಿಂದ ದಿ.31.3.2006ರ ಅವಧಿಗೆ ಮುಂದುವರಿಸಲು ಸಚಿವ ಸಂಪುಟವು ಅನುಮೋದನೆಯನ್ನು ನೀಡಿದೆಯೆಂದು ತಿಳಿಸಿದೆ. ಈ ಮಿತವೇತನ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ ಅಥವಾ ಅವನ್ನು ಖಾಯಂಹುದ್ದೆಗಳನ್ನಾಗಿ ಪರಿವರ್ತಿಸುವ ಬಗ್ಗೆ ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಿ ಆಡಳಿತ ಇಲಾಖೆಯು ಕ್ರಮ ಕೈಗೊಳ್ಳ ಬೇಕಾಗುತ್ತದೆ.

(2) ಮಿತವೇತನ ಹುದ್ದೆಗಳಲ್ಲಿ ಹಾಲಿ ಗ್ರಾಮಸಹಾಯಕರಾಗಿ ಕಾರ್ಯ ನಿರ್ವಹಿಸುತ್ತಿರುವವರ ಸಕ್ರಮಾತಿಯ ಬಗ್ಗೆ ಸಿವಿಲ್ ಅಪೀಲು ಸಂ:4559-4562/98ರಲ್ಲಿ ದಿನಾಂಕ:6.11.2003ರಂದು ನೀಡಿದ ತೀರ್ಪಿನಲ್ಲಿ ಸುಪ್ರೀಂಕೋರ್ಟ್ ಈ ನೌಕರರ ಸೇವಾ ಸಕ್ರಮಾತಿಯನ್ನು ಮಾಡುವಂತಿಲ್ಲವೆಂದು ಪರೋಕ್ಷವಾಗಿ ಹೇಳಿದೆ. ಆದ್ದರಿಂದ ಈ ಕಾರ್ಯನಿರ್ವಹಿಸುತ್ತಿರುವ ಗ್ರಾಮಸಹಾಯಕರ ಸೇವೆಯನ್ನು ಸಕ್ರಮಗೊಳಿಸುವಂತಿಲ್ಲ.

(3) ಸಂವಿಧಾನದ ಅನುಚ್ಛೇದ 309ಕ್ಕೆ ಸುಪ್ರೀಂ ಕೋರ್ಟ್ ತೀರ್ಪಿನಲ್ಲಿ ಉಲ್ಲೇಖವಿದೆ. ರಾಜ್ಯ ಸಿವಿಲ್ ಸೇವೆಯಲ್ಲಿನ ಯಾವುದೇ ಹುದ್ದೆಗೆ ನೇಮಕಾತಿ ವಿಧಾನವನ್ನು ನಿಗದಿಪಡಿಸಲು ಈ ಅನುಚ್ಛೇದದಲ್ಲಿ ಮಾನ್ಯ ರಾಜ್ಯಪಾಲರಿಗೆ ಅಧಿಕಾರವಿದೆ.

ಸದರಿ ಗ್ರಾಮಸಹಾಯಕರ ಸೇವೆಯನ್ನು ಪುನ; 2007-08ನೇ ಸಾಲಿಗೆ ಮುಂದುವರಿಸಲು ಹಾಗೂ ಅವರಿಗೆ ನೀಡಬೇಕಾದಂತಹ ಮಾಸಿಕ ಮಿತವೇತನ ರೂ.2000/-ಗಳಂತೆ 2007-08ಸಾಲಿನ ಆಯವ್ಯಯದಲ್ಲಿ ಅನುದಾನವನ್ನು ಒದಗಿಸಲು ಆರ್ಥಿಕ ಇಲಾಖೆಯ ಅಭಿಪ್ರಾಯವನ್ನು ಕೋರಲಾಗಿ, ಆರ್ಥಿಕ ಇಲಾಖೆಯು ತನ್ನ ಅಭಿಪ್ರಾಯವನ್ನು ಈ ಕೆಳಕಂಡಂತೆ ನೀಡಿದೆ.

Administrative Department's Proposal has been examined. If Revenue Department wants to continue the posts of Gramashayaks, the right procedure is to get the approval of the Cabinet. Therefore, Revenue Department is advised to take the matter to Cabinet and issue continuance Government order.

ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸುವ ಬಗ್ಗೆ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಉನ್ನತ ಮಟ್ಟದ ಸಮಿತಿಯನ್ನು ರಚಿಸಿದ್ದು, ಗ್ರಾಮಸಹಾಯಕರ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ರಚಿಸಿದ ಉನ್ನತ ಮಟ್ಟದ ಸಮಿತಿಯ ಅನುಮೋದನೆಗಾಗಿ ಕಳಿಸಿದ್ದು, ಸದರಿ ಸಮಿತಿಯು ದಿನಾಂಕ:4.6.2007 ರಂದು ಸಭೆ ಸೇರಿ ಈ ಕೆಳಕಂಡಂತೆ ತೀರ್ಮಾನವನ್ನು ತೆಗೆದುಕೊಂಡಿದೆ:-

1. ಆಡಳಿತ ಸುಧಾರಣಾ ಆಯೋಗವು ಗ್ರಾಮಸಹಾಯಕರ ಹುದ್ದೆಗಳನ್ನು ರದ್ದುಪಡಿಸಬೇಕೆಂಬ ಶಿಫಾರಸ್ಸನ್ನು ಕೈಬಿಟ್ಟು ಹಾಲಿ ವ್ಯವಸ್ಥೆಯನ್ನು ಮುಂದುವರೆಸಿಕೊಂಡು ಹೋಗುವುದು.
2. ಇದು ಒಂದು Adhoc ವ್ಯವಸ್ಥೆ ಆಗಿರುವುದರಿಂದ ಇದನ್ನು ಅನಿರ್ದಿಷ್ಟ ಕಾಲ ಮುಂದುವರೆಸಿ ಕೊಂಡು ಹೋಗುವ ಬದಲು ಇದಕ್ಕೆ ಸೂಕ್ತ ಪರ್ಯಾಯ (alternative) ವ್ಯವಸ್ಥೆಯನ್ನು ಕಂದಾಯ ಇಲಾಖೆಯು ರೂಪಿಸುವುದು.
3. ಪ್ರಸ್ತುತ ಗ್ರಾಮಸಹಾಯಕರಿಗೆ ನೀಡುತ್ತಿರುವ ಗೌರವಧನದ ಮೊತ್ತವನ್ನು ಹೆಚ್ಚಿಸುವ ಅಗತ್ಯವಿರುವುದಿಲ್ಲ.

ಮೇಲ್ಕಂಡ ಅಂಶಗಳ ಬಗ್ಗೆ ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ದಿನಾಂಕ:4.6.2007 ರಂದು ನಡೆದ ಉನ್ನತ ಮಟ್ಟದ ಸಮಿತಿ ಸಭೆಯಲ್ಲಿ ಆಡಳಿತ ಸುಧಾರಣಾ ಆಯೋಗವು ಗ್ರಾಮ ಸಹಾಯಕರ ಹುದ್ದೆಗಳನ್ನು ರದ್ದುಪಡಿಸಬೇಕೆಂಬ ಶಿಫಾರಸ್ಸನ್ನು ಕೈಬಿಟ್ಟು ಹಾಲಿ ವ್ಯವಸ್ಥೆಯನ್ನು ಮುಂದುವರೆಸಿಕೊಂಡು ಹೋಗುವಂತೆ ಶಿಫಾರಸ್ಸು ಮಾಡಿರುವುದರಿಂದ ಆಡಳಿತ ಸುಧಾರಣಾ ಆಯೋಗವು ತನ್ನ ವರದಿಯ ಕಂಡಿಕೆ 9.23ರಲ್ಲಿ ಗ್ರಾಮಸಹಾಯಕರ ಹುದ್ದೆಗಳನ್ನು ರದ್ದುಪಡಿಸುವಂತೆ ಶಿಫಾರಸ್ಸು ಮಾಡಿರುವುದನ್ನು ಕೈಬಿಟ್ಟು, ಈಗಾಗಲೇ ಮಂಜೂರಾಗಿರುವ ಒಟ್ಟು 10450 ಗ್ರಾಮಸಹಾಯಕರ ಹುದ್ದೆಗಳನ್ನು ಈಗ ಹಾಲಿ ನೀಡುತ್ತಿರುವ ಮಿತವೇತನ ರೂ.2000/-(ರೂಪಾಯಿಗಳು ಎರಡು ಸಾವಿರ ಮಾತ್ರ)ಗಳಂತೆ ಮಿತವೇತನದ ಆಧಾರದ ಮೇಲೆ ಖಾಯಂ ಆಗಿ ಮುಂದುವರೆಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 01ಬಿಎಸ್.ಸಿ.2005, ಬೆಂಗಳೂರು, ದಿ.10ನೇ ಜುಲೈ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಆಡಳಿತ ಸುಧಾರಣಾ ಆಯೋಗವು (Administrative Reforms Commission) ತನ್ನ ವರದಿಯ ಕಂಡಿಕೆ 9.23 ರಲ್ಲಿ ಗ್ರಾಮ ಸಹಾಯಕರ ಹುದ್ದೆಗಳನ್ನು ರದ್ದುಪಡಿಸುವಂತೆ ಶಿಫಾರಸ್ಸು ಮಾಡಿರುವುದನ್ನು ಕೈಬಿಟ್ಟು ಆದೇಶಿಸಿದೆ ಹಾಗೂ ಈಗಾಗಲೇ ಮಂಜೂರಾಗಿರುವ 10450 ಗ್ರಾಮ ಸಹಾಯಕರ ಹುದ್ದೆಗಳನ್ನು ಮಾಸಿಕ ಮಿತವೇತನ ರೂ.2000/-(ರೂಪಾಯಿಗಳು ಎರಡು ಸಾವಿರ ಮಾತ್ರ)ಗಳಂತೆ ಮಿತವೇತನದ ಆಧಾರದ ಮೇಲೆ ಖಾಯಂ ಆಗಿ ಮುಂದುವರೆಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್.ದೇಸಾಯಿ**

ಪಿ.ಆರ್. 1373

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಪರಿಹಾರ ಮತ್ತು ಸೇವೆಗಳು-2)

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

## ತಿದ್ದುಪಡಿ

**ಸಂ: ಲಾ 113 ಎಲ್‌ಸಿಇ 2007, ಬೆಂಗಳೂರು, ದಿನಾಂಕ: 19ನೇ ಜುಲೈ 2007**

ಸರ್ಕಾರಿ ಆದೇಶ ಸಂಖ್ಯೆ:ಲಾ 113 ಎಲ್‌ಸಿಇ 2007 ದಿನಾಂಕ:16.07.2007ರ ಆದೇಶದ ಭಾಗದ ಕಂಡಿಕೆ 2 ರಲ್ಲಿ ಸೂಚಿಸಿರುವ ಲೆಕ್ಕ ಶೀರ್ಷಿಕೆ ಬದಲಾಗಿ ಈ ಕೆಳಕಂಡಂತೆ ಲೆಕ್ಕ ಶೀರ್ಷಿಕೆಯನ್ನು ಓದಿಕೊಳ್ಳುವುದು.

ಈ ಸಂಬಂಧದ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2014–00–105–0–10 (ಯೋಜನೆ) ಅಡಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇ. ಶಿವಾನಂದ**

ಪಿ.ಆರ್. 1366

ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.